# ಚಂದ್ರಮಂಚಕೆ ಬಾ, ಚಕೋರಿ!



ಕುವೆಂಪು

ಉದಯರವಿ
ವಾಣೀವಿಲಾಸಪುರಂ
ಮೈಸೂರು

# ಅರ್ಪಣೆ

ನನ್ನ ಜೀವನ ಲಕ್ಷ್ಮಿಗೆ
ನನ್ನ ಹೃದಯದ ವಾಣಿಗೆ
ಪ್ರೇಮದೀ ಕೃತಿ ಕಾಣಿಕೆ
ಚೆಲುವಿನೊಲವಿನ ರಾಣಿಗೆ !

ಆನಂದದೀ ಕೇಂದ್ರಕೆ
ಸೌಂದರ್ಯದೀ ನೇಮಿಗೆ
ರಸ ತಪಸ್ಯೆಯ ಕಾಣಿಕೆ
ಗೃಹತಪಸ್ವಿನಿ ಹೇಮಿಗೆ !

# ಅನುಕ್ರಮಣಿಕೆ

# ಚಂದ್ರಮಂಚಕೆ ಬಾ, ಚಕೋರಿ!

ಚಂದ್ರಮಂಚಕೆ ಬಾ, ಚಕೋರಿ!
ಜ್ಯೊನ್ಸ ಜೇನಿಗೆ ಬಾಯಾರಿದೆ
ಚಕೋರ ಚುಂಬನ!
ಚಂದ್ರಿಕಾ ಮಧುಪಾನ ಮತ್ತ
ಪೀನ ಕುಂಭ ಪಯೋದವಿತ್ತ
ವಕ್ಷ ಪರಿರಂಭನ ನಿಮಿತ್ತ
ನಿರಾವಲಂಬನ!
ಬಾ, ಚಕೋರಿ! ಬಾ, ಚಕೋರಿ!
ಚಾತಕದೊಲು ಬಾಯಾರಿದೆ
ಚಕೋರ ಚುಂಬನ!

ಚರಣನೂಪುರ ಕಿಂಕಿಣೀ ಕ್ವಣ
ಮದನ ಸಿಂಜಿನೀ ಜನಿತ ನಿಕ್ವಣ:
ಚಿತ್ತ ರಂಜಿನಿ, ತಳುವದೀ ಕ್ಷಣ
ಚಂದ್ರಮಂಚಕೆ ಬಾ, ಚಕೋರಿ!
ಬಾ, ಚಕೋರಿ! ಬಾ, ಚಕೋರಿ!
ಚಾತಕದೊಲು ಬಾಯಾರಿದೆ
ಚಕೋರ ಚುಂಬನ!

ತೆರೆಯ ಚಿಮ್ಮಿಸಿ, ನೊರೆಯ ಹೊಮ್ಮಿಸಿ,
ಕ್ಷೀರಸಾಗರದಲ್ಲಿ ತೇಲುವ
ಬಾಗುಚಂದ್ರನ ತೂಗುಮಂಚಕೆ
ಬಾ, ಚಕೋರಿ! ಬಾ, ಚಕೋರಿ!
ಎದೆ ಹಾರಿದೆ ಬಾಯಾರಿದೆ
ಚಕೋರ ಚುಂಬನ!

ನಿಕುಂಜ ರತಿವನ ಮದನಯಾಗಕೆ
ಅನಂಗ ರಕ್ತಿಮ ಬಿಂಬ ಭೋಗಕೆ
ಕಾಂಕ್ಷಿಯಾಗಿದೆ ನಗ್ನಯೋಗಕೆ
ಇಕ್ಷುಮಂಜ ರಸಾಗ್ನಿ ಪಕ್ಷಿಯು
ಅಚಂಚು ಚುಂಬನ!
ಬಾ, ಚಕೋರಿ! ಬಾ, ಚಕೋರಿ!
ಚಂದ್ರಮಂಚಕೆ ಬಾ, ಚಕೋರಿ!



# ಸುಂದರಮುಖ ಶಾಶ್ವತಸುಖ !

ಸುಂದರ ಮುಖ ಶಾಶ್ವತಸುಖ ;
ನಶ್ವರದಲಿ ನಾಕಸಖ !
ಬಾಳ್‌ಬೇಸರ ಯವನಾಸುರ
ನರಸಿಂಹನ ವ್ಯಾಘ್ರನಖ !

ಹಾಲೌತಣ, ಜೇನೌತಣ,
ಚೆಲುವಿನೌತಣ ;
ಎದೆಯೌತಣ, ಉಸಿರೌತಣ,
ಒಲವಿನೌತಣ !
ಕಂಡನಿತೂ ಕಂಡನಿತೂ
ಕಣ್ ತಣಿಯದೌತಣ ;
ಉಂಡನಿತೂ ಉಂಡನಿತೂ
ಮೆಯ್ ದಣಿಯದೌತಣ !
ಸುಂದರ ಮುಖ ಶಾಶ್ವತ ಸುಖ ;
ನಶ್ವರದಲಿ ನಾಕಸಖ !

ದನಿ ದನಿ ದನಿ ಹನಿ ಹನಿ ಹನಿ
ಕಿವಿಗೆ ವೀಣೆಯೌತಣ ;
ಝುಣಝುಣಝುಣ ನೂಪುರಕ್ವಣ
ಪಂಚಪ್ರಾಣದೌತಣ ;
ಹೂವಿನ ಕಣ, ಪರಿಮಳ ರಣ,
ಪ್ರಣಯ ರಸಪ್ರಾಂಗಣ !
ಕಟಿಯಿಂಚರ ತುಟಿಯಿಂಚರ
ಪಂಚಪ್ರಾಣದೌತಣ ;
ಸರ್ವೇಂದ್ರಿಯ ರತಿಮಂದಿರ
ಪುಷ್ಪಧನ್ವನೌತಣ !
ಸುಂದರ ಮುಖ ಶಾಶ್ವತ ಸುಖ ;
ನಶ್ವರದಲಿ ನಾಕಸಖ !
ಬಾಳ್‌ಬೇಸರ ಯವನಾಸುರ
ನರಸಿಂಹನ ವ್ಯಾಘ್ರನಖ !

# ಪ್ರಣಯ ದಯಾಭಿಕ್ಷೆ

ನಿನಗೆ ಕಡಮೆ, ನನಗೆ ಹೆಚ್ಚು !
ಅವನ ಹುಚ್ಚಿಗೆ
ಇದಿರೆ ಹೇಳು ನಮ್ಮ ಕೆಚ್ಚು,
ದೇವರಿಚ್ಛೆಗೆ ?

ನಿನ್ನ ತೃಷ್ಣೆಗೊಂದೆ ಸಾಕು
ಕಿರಿ ತರಂಗ.
ನನ್ನ ತೃಷ್ಣೆಗೆತ್ತ ಸಾಕು
ಉದಧಿರಂಗ ?
ಅಂಗ ಮಾತ್ರವಲ್ಲ, ಬೇಕು
ನಿನ್ನ ಸಂಗ ;
ಸಂಗ ಮಾತ್ರವಲ್ಲ, ಬೇಕು
ಅಂತರಂಗ !

ಕ್ಷಮಿಸು, ಪ್ರಿಯೆ ! ತೋರು ದಯೆ !
ಹೃದಯ ಹಸಿದಿದೆ !
ಅನ್ನವೂಡಿ ಸಲಹು, ಪ್ರಿಯೆ,
ಬಾಳು ಕುಸಿದಿದೆ !
ಒಡಲು ಉಸಿರೊಳಗ್ನಿಮಯೆ
ನಗ್ನೆ ಕುಣಿವಳುರ್ವಸಿಯೆ !
ಏನೊ ಏನೊ ಏನೊ ಏನೊ
ಏನೊ ಮಸೆದಿದೆ !
ಹೃದಯ ಹಸಿದಿದೆ !

ಅಮೃತ ಕಲಶ ತೀರ್ಥ ಜಲದ
ಮಧುರ ವಕ್ಷ ಮೃದುಸ್ಥಲದಿ
ಮಲಗಿಸೆನ್ನ ಮುದ್ದಿಸು,
ರಸೋನಿದ್ರೆಗದ್ದಿಸು!
ಚಂದ್ರ ಕಿರಣ ಸದೃಶ ಚರಣ
ಮಧು ಮೋಹನ ಸುಧಾತಲದಿ
ಚುಂಬಿಸೆನ್ನ ಮುದ್ದಿಸು,
ಭೋಗಸುಪ್ತಿಗದ್ದಿಸು!
ಅತನುಮಂಚದಿಕ್ಷು ಬಿಲದ
ಪುಲಕ ಚಂಚರೀಕ ಕುಲದ
ಅತುಲ ನೀಲ ರಸಸ್ಥಲದಿ
ಆಲಿಂಗಿಸು, ಮುದ್ದಿಸು,
ಕ್ಷೀರಮೂರ್ಛೆಗದ್ದಿಸು!



# ಹೇಗೆ ?

ನಡು ಹಗಲು ; ನಿಡು ಹಗಲು ;
ನೀರಸತೆ ; ಬೇಸರಿಕೆ ;
ದಹಿಸುವುದು ಬೇಗೆ.
ನೀನಿಲ್ಲದಿವಸು ನಾ
ಸಹಿಸುವುದು ಹೇಗೆ ?

ಸೂರ್ಯನಾತಪ ತಾಪ
ತಾನುರಿವ ಕೂಪ,
ಭಾರ್ಯಾ ವಿರಹತಾಪ
ಮಿಗಿಲಗ್ನಿ ಶಾಪ !

ತೂಕಡಿಪ ನಿಮಿಷಗಳೊ
ಕಾಲನಾಕಳಿಕೆ ;
ತತ್ತರಿಪ ಗಂಟೆಗಳೊ
ಮಿತ್ತು ಬೊಬ್ಬುಳಿಕೆ !

ದಹಿಸೆ ಬಿಸಿಲಿನ ಬೇಗೆ,
ಕಾಗೆ ಕರ್ರನೆ ಕೂಗೆ,
ಹಾಳ್‌ಹಗಲೆ ತಾನಾಗೆ
ಆಕಳಿಪ ಗೂಗೆ,
ನೀನಿಲ್ಲದಿವಸು ನಾ
ಸಹಿಸುವುದು ಹೇಗೆ ?

+❦+

# ಸತಿಗೆ

ತಾಯ ಚರಣಕಿರಣವೊಂದು
ಕೃಪೆಯೊಳಿನ್ನ ಪೊರೆಯಲೆಂದು
ನಿನ್ನ ರೂಪದಿಂದ ಬಂದು
ಸಲಹುತಿರುವುದೆನ್ನ ಸಿಂದು !
ಮರೆಯುತದನು ಒಮ್ಮೆಯೊಮ್ಮೆ
ಗಂಡನೆಂಬ ಗಂಡುಹೆಮ್ಮೆ
ಮನವ ಮಥಿಸೆ ತಡೆಯಲಮ್ಮೆ:
ಮರ್ತ್ಯನೊಂದು ಮನಃಸ್ಥಿತಿ
ಮತ್ತೆ ಮತ್ತೆ ಈ ವಿಸ್ಮೃತಿ ;
ಹೇ ಮಾಸತಿ, ಪ್ರೇಮಾವತಿ,
ಮೃಣ್ಮಯದಲಿ ಚಿನ್ಮಯ ರತಿ,
ಮನ್ನಿಸೆನ್ನ ಭಗವತಿ !



## ಮಧುಮಂಚಕೆ ಬಾ, ಮದುಮಗಳೆ!

ಮಧುಮಂಚಕೆ ಬಾ, ಮದುಮಗಳೆ,
ಮದನನ ಬಿಲ್ಲಿನ ಬಿರಿಮುಗುಳೆ,
ಮಾವನ ಮುದ್ದಿನ ಸಿರಿಮಗಳೆ,
ಮಧುಮಂಚಕೆ ಬಾ, ಮದುಮಗಳೆ!

ಚಂದ್ರಾನನದಲಿ ಬಿಂಬಾಧರ ಮಧುರಸದೋಕುಳಿಯನು
ಸಿಂಚಿಸಿ ಬಾ;
ಕಾಂಚನ ಸುಂದರ ಕಿಂಕಿಣಿ ಸುಮಧುರ ಕಾಂಚೀಪದವನು
ಮಿಂಚಿಸಿ ಬಾ;
ರಂಭೆ ತಿಲೋತ್ತಮೆ ಮೇನಕೆಯರ ನಂದನ ಶೃಂಗಾರವ
ವಂಚಿಸಿ ಬಾ;
ಇಂದ್ರ ಸಹಸ್ರರ ಅಕ್ಷಿ ಸಹಸ್ರಕೆ ಶಚೀ ಸಹಸ್ರರ
ಹೊಂಚಿಸಿ ಬಾ!

ಮಧುಮಂಚಕೆ ಬಾ, ಮದುಮಗಳೆ,
ಮದನನ ಬಿಲ್ಲಿನ ಬಿರಿಮುಗುಳೆ,
ಮಾವನ ಮುದ್ದಿನ ಸಿರಿಮಗಳೆ,
ಮಧುಮಂಚಕೆ ಬಾ, ಮದುಮಗಳೆ!



# ಹೂವಿಗೆ ಚಿಟ್ಟೆ

ನೀನು ಹೂವು, ನಾನು ಚಿಟ್ಟೆ ;
ನಿನ್ನ ನೊಲಿವುದೆನ್ನ ನಿಟ್ಟೆ.
ನನ್ನ ಬಾಳ ರಸದ ಬಟ್ಟೆ,
ನೀನು ಮುನಿಯಲಾನು ಕೆಟ್ಟೆ !
ನಿನ್ನ ಮೇಲೆ ನನಗೆ ಸಿಟ್ಟೆ ?
ಆಡಬೇಡ ಅನೃತವ.
ವಿರಹದುರಿಯೊಳಯ್ಯೊ ಸುಟ್ಟೆ !
ಸಾಕು ಮಾಡು ; ಬೇಗ ನೀಡು
ಅಧರಮಿಲನದಮೃತವ !



# ಶಕ್ತಿ

ನೀನು ಶಕ್ತಿಯಂಶಳಲ್ತೆ ?
ನಿನ್ನ ಶಕ್ತಿಗಿಹುದೆ ಎಲ್ಲೆ ?
ನರಕ ಶೂಲಕೆತ್ತ ಬಲ್ಲೆ ;
ಸ್ವರ್ಗವಕ್ಷ ಕೊತ್ತ ಬಲ್ಲೆ !
ಇಹುದೆ ನಿನ್ನ ಶಕ್ತಿಗೆಲ್ಲೆ,
ಹೇಳ, ನನ್ನ ಮುದ್ದು ನಲ್ಲೆ ?



# ಜೀವನಾ! ಸಂಜೀವನಾ!

ಜೀವನಾ! ಸಂಜೀವನಾ!
ನನ್ನ ಜೀವಕೆ ನೀನೆ
ಜೀವನಾ! ಸಂಜೀವನಾ!
ನೀನುಳಿಯೆ ನಾನು ನೀರುಳಿದ ಮೀನು;
ನೀನೆ ಜೀವನ ಜೀವನಾ ಸಂಜೀವನಾ!

ತಂಪಲಾ! ಜೇನಿಂಪಲಾ!
ನನ್ನ ಉಸಿರಿಗೆ ನೀನೆ
ತಂಪಲಾ! ಜೇನಿಂಪಲಾ!
ನೀನು ಮುನಿದರೆ ಬಿಸಿಲ್;
ನೀನೊಲಿಯೆ ತಣ್ಣೆಳಲ್;
ನನ್ನ ಬಾಳಿಗೆ ತಂಪಲಾ ನೀ ಜೇನಿಂಪಲಾ!

ಕಂಪಲಾ! ಸವಿಸೊಂಪಲಾ!
ಪದ್ಮ ಹೃದಯಕೆ ನೀನೆ
ಕಂಪಲಾ! ಸವಿಸೊಂಪಲಾ!
ನೀನಪ್ಪಲಾನ್ ಅಮೃತ;
ನೀ ತಪ್ಪಿದರೆ ನಾ ಮೃತ!
ನನ್ನೆದೆಯ ಕಮಲದ ಕಂಪಲಾ ನೀ ಸವಿಸೊಂಪಲಾ!
ಜೀವನಾ! ಸಂಜೀವನಾ!
ನನ್ನ ಜೀವಕೆ ನೀನೆ
ಜೀವನಾ! ಸಂಜೀವನಾ!

# ಗೃಹವೆ, ಬರುವಳೆಂದು ಗೃಹಿಣಿ ?

ಗೃಹವೆ, ಬರುವಳೆಂದು ಗೃಹಿಣಿ,
ಹೇಳು, ನನ್ನ ಸಹಧರ್ಮಿಣಿ ?
ತವರಿಗಂದು ತೆರಳೆ ತರುಣಿ
ಅಸ್ತವಾದನೆನ್ನ ದ್ಯುಮಣಿ.
ಚೆಂಡುಹೂವು, ಜಿನಿಯ ಹೂವು,
ಚುಕ್ಕಿಚುಕ್ಕಿ ರಾಸಿ ಹೂವು,
ಕಾಶಿತುಂಬೆ, ಏನನೆಂಬೆ !
ತೋಟ ತುಂಬಿ, ನೋಟ ತುಂಬಿ,
ಮೆರೆಯುತಿಹವು ಮೋಹವರಳಿ
ಸಂಗದಾಸೆಯುರಿಯ ಕೆರಳಿ !
ಎಂದು ಬಹಳು ನನ್ನ ಪ್ರೇಮಿ ?
ಹೇಳು, ಗೃಹವೆ ! ಸಂಗಕಾಮಿ
ಅಂಗಲಾಚಿ ನಾಚಿ ನಾಚಿ
ಯಾಚಿಸಿಹನು ಕವಿಸ್ವಾಮಿ !
ಏನು ಬರಿಯ ಗೃಹವೆ ನೀನು ?
ಗೃಹದೇವತೆ ! ಬಲ್ಲೆ ನಾನು !
ಮೃಣ್ಮಯದಲಿ ನೀ ಸೌಧ,
ಚಿನ್ಮಯದಲಿ ಗುರುಪಾದ !
ಹೇಳು, ಹೇಳು : ನಿನ್ನ ಮಗಳು
ಎಂದು ಬಹಳು ನನ್ನವಳು ?



# ಅಮೃತ ನಿಧನ

ನಿಶೆಯು ಸೀರೆಗೆ ಅಂಚು
ಕಟ್ಟಿತ್ತುಷೆಯ ಕೆಂಚು :
ಚಿನ್ನದೋಕುಳಿ ಚೆಲ್ಲಿ
ಮಂಚಪರದೆಯ ಬೆಳ್ಳಿ
ಮಿಂಚುಗೆರೆಯಾಂತು
ಹೊನ್ನಾಯ್ತು ತಂತು !—
ಬೆಳಗಾದುದಂತೂ ! !

ಎಚ್ಚತ್ತು ಕಣ್ದೆರೆದೆ :
ಏನಚ್ಚರಿ !
ಪವಡಿಸಿಹುದೊತ್ತಿನೊಳೆ
ಚಿತ್ತಜಶ್ರೀ !
ಆಚುರೆಯಿಂದೈತಂದು
ನೆಲವ ಕೈಹಿಡಿದೊಂದು
ತಟಿದಪ್ಸರೀ !—

ನನ್ನ ನೀಡಿದ ತೋಳೆ
ಹೊನ್ನ ತಲೆಗಿಂಬಾಗೆ
ಮುದ್ದಾಗಿ ಮಲಗಿರ್ದ
ಪದುಮಿನಿಯೊಳಿರ್ದೆರಡು
ಕಂಗೊಳಿಪ ಕೊಳಗಳಲಿ
ನೀರಾಡಿದೆ !
ತುಂಬಿಯಾಗುತೆ ಹಾಡಿ
ಎಸಳೆಸಳ ನಿರಿಯಾಡಿ
ಕೇಸರಂಗಳ ಕಾಡಿ
ಹಾರಾಡಿದೆ !
ಮಧುರಸದ ಮಡುವಿನಲಿ
ಮುಳುಗಾಡಿದೆ !—

ಚಕ್ರವಾಕವನೊತ್ತಿ
ಶೈವಾಲಗಳನೆತ್ತಿ
    ಬೀಸಾಡಿದೆ!
ತೆರೆಮರೆಯ ಸವಿ ಹೀರಿ
ಹೊಮ್ಮಳಲ ನಡುವೇರಿ
    ಈಸಾಡಿದೆ!
ಕಟಿಗೆ ಬಂಧನವಾಗಿ
ತುಟಿಗೆ ಚಂದನವಾಗಿ
    ಓಲಾಡಿದೆ!
ಜೇನಾಗಿ ಮೀನಾಗಿ
ನಾನಾಗಿ ತಾನಾಗಿ
    ತೇಲಾಡಿದೆ!
    ಹಾಲಾಡಿದೆ!—

ಮಂಚವಾಯಿತೊ ಮದನ
    ಸುರನಂದನ;
ಪ್ರೇಮಾಂಗಿನಿಯ ವದನ
    ಶಚಿಯ ಸದನ:
ಕ್ಷೀರಸಾಗರ ಮಥನ
ಕಥನವಾಗಲು ಮಿಥುನ
    ರದನ ಕದನ,
ಮಿಲನ ಬೃಂದಾವನದ
ನಿಧುವನ ನಿಕುಂಜದಲಿ
ಭೋಗನರಹರಿ ನಖದ
ಮುಖದೊಳಾದುದೊ ಸುಖದ
    ಅಮೃತನಿಧನ!



# ಹರಗಿರಿಜಾ

೧

ಪರ್ವತ ವಧೂ ಹೃದಯೇಶ್ವರ
ವರನಾದಾ ಅನಂತರ
ಸುರಶುಭಕಾ ಶಿವಶಿವೆಯರ
ಒಸಗೆಯಾಯ್ತೊ ಜಗಜ್ಜ್ವರ!

ಹರನೆಂದನು ಆಲಿಂಗಿಸಿ
ಸತಿಯ ಚುಂಬಿಸಿ:
"ನೀನು ಸುರ ಸರೋವರ,
ನಾನು ದೇವಕುಂಜರ!"

ಶಿವನ ಇಚ್ಛೆ ಮಿಥ್ಯೆಯಹುದೆ
ಶಕ್ತಿಯೊಡನಿರೆ?
ಅವನಿಚ್ಛೆಯೆ ಸೃಷ್ಟಿಯಲ್ತೆ
ಅವಳೆ ಬಳಿಯಿರೆ?
ಶಿವನಾದನು ಸುರಕುಂಜರ;
ಶಿವೆಯಾದಳು ಸರೋವರ!
ಜುಮ್ಮೆಂದುದು ದೇವಾಸುರ,
ರೋಮಾಂಚಿಸೆ ಚರಾಚರ!

ಕ್ಷೀರವಾರ್ಧಿ ಕುಗ್ಗಿತೊ ಎನೆ
ಹಿಗ್ಗಿತಾ ಸರೋವರ;
ಸ್ಪರ್ಧಿಸಿತೆನೆ ಗಿರಿ ಮಂದರ
ವರ್ಧಿಸಿತ್ತು ಕುಂಜರ!
ಸರೋವರಕೆ ಅಂಚು ಕಟ್ಟಿ
ಸೊಗಸಿತು ಸುರನಂದನ;

ಅಪ್ಸರಿಯರ ಚಂದ್ರಗಾನ,
ವೃಂದವಿಹಗ ಕೂಜನ
ತಾನತಾನವುಕ್ಕುತಾಯ್ತು
ಸ್ವರಾಕ್ಷತಾ ಗುಂಜನ!

ಗಂಧರ್ವರ ಕೊರಳಿಂಚರ
ಕೊಂಚೆಯಂಚೆ ಕೊಳರ್ವಕ್ಕಿಯ
ರೂಹುವೆತ್ತು ಇಳಿತರೆ,
ನೋಳ್ಪ ಸುರರ ಕಣ್ಗಳರಳಿ
ಮೂಡಿತು ಮಹಾ ಕೊಳದ ಮೆಯ್ಗೆ
ನೂರು ಕೋಟಿ ತಾವರೆ!

ಸರೋ ನೀವಿ ಕೆದರಿ ಸೂಸೆ
ದುಮುಕಿತು ಐರಾವತ;
ಕೈಗೂಡಿತು ನೀರ್‌ನಿರಿಯೊಳೆ
ಅಗ್ನಿಯ ಸುಮನೋರಥ!
ಸತನುವಾದನತನು ರತಿಗೆ:
ಯೋಗೀಶ್ವರ ತ್ಯಾಗೀಶ್ವರ
ಹರನಾದನು ಗಿರಿಜಾತೆಗೆ
ಭೋಗೇಶ್ವರ ಮನ್ಮಥ!

ಹಗಲಾಯಿತು, ಇರುಳಾಯಿತು,
ದಿನ ಮೂಡಿತು, ದಿನ ಮುಳುಗಿತು;
ಪಕ್ಷವಾಯ್ತು, ಮಾಸವಾಯ್ತು,
ವರುಷ ವರುಷ ವರುಷ ಹೋಯ್ತು;
ಯುಗ ಬಂದಿತು; ಯುಗ ಸಂದಿತು;
ಬತ್ತದಾ ಸರೋವರ;
ಸೋಲದು ಸುರಕುಂಜರ!

೨

ಹರನೆಂದನು ಆಲಿಂಗಿಸಿ
ಸತಿಯ ಚುಂಬಿಸಿ :
"ನೀ ಬಸಂತ ಬನಸಿರಿ!"
ಉಮೆಯೆಂದಳು ಮಂದ ಹಸಿತೆ
"ನೀವಾಗಿರಿ ವಿಹಂಗಮ
ನಿತ್ಯ ಜಂಗಮ!
ನೀವಾಗಿರಿ ಮಧುಕರ
ಮಧುರ ಝೇಂಕರ!
ನೀವಾಗಿರಿ ಪರ್ವತ
ಮಲಯ ಮಾರುತ!
ನಾಟ್ಯವಾಡಿ ನಲಿದು ಬನ್ನಿ
ಕಂಪ ಬೀರುತ!
ಸರ್ವ ಜೀವ ಜಡಗಳಲ್ಲಿ
ನೀವೆ ಗಂಡು; ನಾನೆ ಹೆಣ್ಣು.
ಸಕಲ ಸೃಷ್ಟಿಮೂಲದಲ್ಲಿ
ಪುರುಷಪ್ರಕೃತಿ ಎರಡು ಕಣ್ಣು.
ಶಿವ, ಶಕ್ತಿ; ಶಕ್ತಿ, ಶಿವ;
ಮಿಲನದಾಟವದುವೆ ಭವ!
ಭೋಗಲೀಲೆ ಸಾಗಿದೆ;
ನಾನು ನೀನು ಆಗಿದೆ!"

೩

ಶಿವನೆಂದನು ಆಲಿಂಗಿಸಿ
ಸತಿಯ ಚುಂಬಿಸಿ :—
"ನಾ ಕುವೆಂಪು! ನೀನೆ ಹೇಮಿ!"
ಸತಿಗೆಂದನೊ ಶಿವಸ್ವಾಮಿ!!—
ಆ ಶಿವನ ಆ ಶಿವೆಯ
ಆಟದೊಂದು ಅಂಗ
ನನ್ನ ನಿನ್ನ ಸಂಗ!

ಹಿಂದೆ ಇದ್ದುದಿಂದು ಇಹುದು
ಮುಂದೆ ಬರುವುದೆಲ್ಲ
ಶಿವನ ಶಿವೆಯು ಆಟದೊಳಗು ;
ಹೊರಗು ಎಂಬುದಿಲ್ಲ :
ಆನಂದದ ಅಂಶವಲ್ತೆ
ನಮ್ಮ ನೋವೂ ?

ಅಮೃತತ್ವದ ಅಂಗವಲ್ತೆ
ನಮ್ಮ ಸಾವೂ ?
ಶಿವ ಶಿವಾಣಿಯಾಟ
ನನ್ನ ನಿನ್ನ ಬೇಟ !



# ಪ್ರೇಮ ಹೇಮ ರಂಗದಿ

ನೋಡಿ ಕಣ್ ಸಾರ್ಥಕ!
ಕೇಳಿ ಕಿವಿ ಸಾರ್ಥಕ!
ಸೋಂಕಿ ಮೆಯ್ ಸಾರ್ಥಕ!
ಅಪ್ಪಿ ಬಾಳ್ ಸಾರ್ಥಕ!

ಚೆಲುವಿಗಿರಲು ಒಡಲ ಮನೆ
ಒಲವುಗಡಲಿಗಿಹುದೆ ಕೊನೆ!
ನಾನೆ ಪಯಿರು, ನೀನೆ ತೆನೆ;
ಬಾಳ ಬಾಳಿಗಿನಿಯೆ ಗೊನೆ!
ರಸವೆ ತೆನೆ, ರಸವೆ ಕೊನೆ;
ನೆನೆ, ನೆನೆ, ತೂಗಿ ತೊನೆ!

ಹರಿಯುತಿಹುದನಂಗ ನದಿ
ಅಂಗ ಅಂಗ ಅಂಗದಿ;
ವಿರಹ ಮಿಲನ ನರಕ ನಾಕ
ದುಃಖ ಸುಖ ತರಂಗದಿ
ಪಾತ್ರವಾಡುತಿಹುದು ನನ್ನ
ಹೃದಯಮಾನಸನೇತ್ರ ನಿನ್ನ
ಪ್ರೇಮಹೇಮ ರಂಗದಿ!



# ನೀನು ನಕ್ಕರೆ!

ನನ್ನ ಅಕ್ಕರೆ
ಜೇನುವುಕ್ಕಿರೆ
ನೀನು ನಕ್ಕರೆ
ಹಾಲು ಸಕ್ಕರೆ:
ಹಾಲಿನಲ್ಲಿ ಸಕ್ಕರೆ
ನಿನ್ನೊಳೆನ್ನ ಅಕ್ಕರೆ!

ಅಮರವೃಕ್ಷ ಮುಖದಲಿ
ಅಧರಮಧುವನೀಂಟುವೆ;
ಅಮೃತವಕ್ಷ ಸುಖದಲಿ
ಆನಂದವೀಣೆ ಮಿಾಂಟುವೆ:
ಮರ್ತ್ಯದಾ ಕ್ಷಣಿಕದಲಿ
ದಿವೌಕಸಕೆ ದಾಂಟುವೆ!
ನನ್ನ ಅಕ್ಕರೆ . . .

ಇಂದ್ರಿಯಂಗಳೆ
ಇಂದ್ರನಂದನ!
ನಾಲ್ಕು ನೋಟದಾ
ಏಕ ಕೂಟದಾ
ಸೋತ ಕಂಗಳೆ
ಸೇತು ಬಂಧನ:

ಭಾವಭೂಮಿಗೇರುವೆ;
ದೇವತ್ವಕೆ ಹಾರುವೆ.
ನನ್ನ ನಿನ್ನ ಸೇರುವೆ
ನಾನು ನೀನು ಮಿಾರುವೆ:
ನಶ್ವರದಾ ಕ್ಷಣದಲಿ
ಶಾಶ್ವತವನೆ ಹೀರುವೆ!
ನನ್ನ ಅಕ್ಕರೆ . . .

# ಮಂಚದಲ್ಲಿ ಜ್ಯೋತ್ಸ್ನೆ

ಚಂದ್ರ ಕಿರಣ ರುಕ್ಮಿಣೀ, ಓ,
ಬಾ, ಕೃಷ್ಣಪಕ್ಷದೀ
ಶುಕ್ಲ ಮಂಚ ಶಾಯಿ ಶ್ರೀ
ಶ್ರೀ ಕೃಷ್ಣವಕ್ಷಕೆ!

ಆಪೂರ್ಣಿಮಾ ಮಧ್ಯರಾತ್ರಿ;
ನಿದ್ರಾ ನಿಶ್ಶಬ್ದ ಧಾತ್ರಿ;
ಸೋಮನದೋ ವ್ಯೋಮಯಾತ್ರಿ;
ಸೃಷ್ಟಿ ಪರಿಷ್ವಂಗ ಸೂತ್ರಿ!
ಅಕ್ಷಿಯಿಾ ಗವಾಕ್ಷದಿ,
ಓ ಚಂದ್ರಕಿರಣ ರುಕ್ಮಿಣೀ,
ಬಾ ಹೃದಯ ಶಯನ ಕಕ್ಷಕೆ:
ಶುಕ್ಲ ಮಂಚ ಶಾಯಿ ಈ
ಶ್ರೀ ಕೃಷ್ಣವಕ್ಷಕೆ!



# ಹೇಮ ಬಂಧನ

ಮಡದಿ ಅಪ್ಸರಿ!
ಮನೆಯೆ ನಂದನ!
ಮುಕ್ತಿಯೈಸಿರಿ
ಪ್ರೇಮಬಂಧನ!

ಗೃಹಿಣಿ ಅಪ್ಸರಿ!
ಗೃಹವೆ ನಂದನ!
ಮೋಕ್ಷದೈಸಿರಿ
ಮೋಹ ಬಂಧನ!

ಅತ್ತ ಜೇನಿಯಾ ಇತ್ತ ಡಾಲಿಯಾ
ಕೆಂಪು ಹಳದಿ ನೀಲಿಯಾ!
ಅಲ್ಲಿ ಚೆಂಡುಹೂ ಇಲ್ಲಿ ಚುಕ್ಕಿಹೂ
ಹವಳ ಮುತ್ತು ಹೊನ್ನಿನಾ!
ನೂರು ಕಣ್ಣ ನೋಟದಿ
ಇಂದ್ರನಾಗಿ ಬೇಟದಿ
ನಲಿಯೆ ಮನೆಯ ತೋಟದಿ
ನಾನು ಕುಸುಮ ಕೂಟದಿ,
ನೀನು ತೇಲಿ ಬಂದರೆ
ನೋಡುತೆನ್ನ ನಿಂದಿರೆ,
ನನ್ನ ಮೋಹಮಂದಿರೆ
ಓ ಪ್ರಾಣಮಂದಿರೆ,
ನೀನೆ ಅಪ್ಸರಿ!
ನಾನೆ ನಂದನ!
ಸ್ವರ್ಗದೈಸಿರಿ
ಹೇಮ ಬಂಧನ!
ನೋಟವಪ್ಸರಿ!
ಕೂಟ ನಂದನ!
ಮುಕ್ತಿಯೈಸಿರಿ
ಬಾಹುಬಂಧನ!

# ದಂಪತಿ

(ಗೌರಿಹಬ್ಬಕ್ಕೆ ಕಬ್ಬಗಾಣಿಕೆ)

ನಮ್ಮ ಬಾಳಿಗೆ
ಸಾಕ್ಷಿ ಹೋಳಿಗೆ!
ನಾನು ಕಣಕ, ನೀನು ಹೂರ್ಣ:
ನಿನ್ನನಪ್ಪಿ ನಾನು ಪೂರ್ಣ!
ನಾನಿಲ್ಲದೆ ನೀನು ಚೂರ್ಣ;
ನೀನಿಲ್ಲದೆ ನಾನು ಶೀರ್ಣ!
ಎರಡು ಹೆಸರು, ಒಂದೆ ಉಸಿರು;
ನಾನು ಪತಿ, ನೀನು ಸತಿ,
ಒಂದೆ ದಂಪತಿ!

ನಿನ್ನ ವಿನಾ ನಾನು ಶೂನ್ಯ;
ತೊರೆಯೆ ನೀನು ನಾ ಜಘನ್ಯ.
ನಿನ್ನ ತಪ್ಪಿ ನಾನು ರಿಕ್ತ;
ನಿನ್ನನೊಪ್ಪಿ ನಾ ಸುಶಕ್ತ.
ನೀ ಬಂಧಿಸೆ ನಾ ವಿಮುಕ್ತ;
ಆಲಿಂಗಿಸೆ ಯೋಗಯುಕ್ತ!
ಎರಡು ಹೆಸರಿಗೊಂದೆ ಉಸಿರು:
ನಾನು ಪತಿ, ನೀನು ಸತಿ,
ಒಂದೆ ದಂಪತಿ!



# ಮುನಿದ ಕಾಂತೆಗೆ

ಮನೆಯ ಬೆಳಗುತಿರುವ ಓ
ನನ್ನ ಹೃದಯ ದೀಪ,
ಎನಿತು ಎಣ್ಣೆ ಸುರಿದರೂ
ಎನಿತು ಬತ್ತಿ ಉರಿದರೂ
ತಣಿಯದಿಹುದೆ ತಾಪ,
ಪೂರ್ವಜನ್ಮ ಶಾಪ
ರೂಪದೀ ಪ್ರಕೋಪ,
ಮನೆಯ ಬೆಳಗುತಿರುವ ಓ
ನನ್ನ ಪ್ರಾಣದೀಪ?

ಹಗಲಿರುಳೂ ಸವಿಯುತಿಹೆ;
ಉರಿದುರಿದೂ ಸವೆಯುತಿಹೆ;
ಚಣಚಣವೂ ತವಿಯುತಿಹೆ!
ತೃಪ್ತಿಯೆ ನಿನಗಿಲ್ಲವೆ?
ಸಾವೆ ಕೊನೆಯ ಗೆಲ್ಲವೆ?
ಸುಪ್ತಿಯೆ ತುದಿಗೆಲ್ಲವೆ?
ಹೇಳು, ಓ,
ಬಾಳ ಬೇವುಬೆಲ್ಲವೆ!



# ಶ್ರದ್ಧೆ—ಕಾಂತೆ

ಓ ನನ್ನ ಶ್ರದ್ಧೆ,
ಓ ಪ್ರಾಣಕಾಂತೆ!—

ಬಗೆಯ ಬಾನಿನಲ್ಲಿ ಕವಿಯುತಿತ್ತು ತಮದ ನಿದ್ದೆ ;
ಕೃಪೆಯ ಕೈಯ ಕದಿರ ಸನ್ನೆಗಿದಿರುನೋಡುತಿದ್ದೆ ;
ಚುಕ್ಕಿಚುಕ್ಕಿ ಮಿರುಗುತಿತ್ತು ಬುದ್ಧಿ ಶಾಸ್ತ್ರವಿದ್ಯೆ ;
ಓ ನನ್ನ ಶ್ರದ್ಧೆ !

ಕೊರಗುತಿತ್ತು ಹೃಚ್ಚಕೋರ ಚಂದ್ರಚಾರು ಚಿಂತೆ ;
ಹಾಲುಬೆಳಕು ಹೊಳೆಯ ಹರಿಸಿ ಬಂದು ಮುಂದೆ ನಿಂತೆ
ರೋಮರೋಮದಲ್ಲಿ ರಸದ ಮಿಂಚು ಹರಿಯುವಂತೆ,
ಓ ಪ್ರಾಣಕಾಂತೆ !



# ಶ್ರೀ ಪಾದಪೂಜೆ

ಶ್ರೀ ಮಾತೆಯ ಪಾದದಲಿ
ಮಕ್ಕಳು ನಾಲ್ವರು ನಾಲ್ವೆರಳು ;
ಸಹಧರ್ಮಿಣಿ ಸತಿ ಹೆಬ್ಬೆರಳು !

ಶ್ರೀ ಗುರುವಾಶೀರ್ವಾದದಲಿ
ಕವಿಗೀ ಸಂಸಾರವೆ ಪೂಜೆ ;
ಪೂಜೆಯೆ ಸಂಸಾರದ ಓಜೆ !

ಸಂಸಾರದ ಸೇವೆ
ಶ್ರೀ ಪಾದದ ಪೂಜೆ ;
ಶ್ರೀ ಪಾದದ ಪೂಜೆ
ಸಂಸಾರದ ಸೇವೆ !



# ಸಂಸಾರ ಸಮುದ್ರ ಮಂಥನ

ಅಮೃತವಿತ್ತ ಶರಧಿಯಲ್ತೆ
  ವಿಷವ ಹಡೆದುದು ?
ದೇವರೊಡನೆ ದನುಜರಲ್ತೆ
  ಕಡಲ ಕಡೆದುದು ?
ಅಮೃತದೊಡನೆ ವಿಷವ ಕೂಡಿ
  ವರವ ಪಡೆದುದು ?
ನೀರು ಒಂದರಿಂದ ಅಲ್ತೆ
  ಎರಡು ಒಡೆದುದು?

ಅಮೃತ ಮಾತ್ರ ವರವ ಪಡೆಯೆ
ನಾನು ನೀನು ಬಾಳ ಕಡೆಯೆ
ವಿಷವನಿರದೆ ಬದುಕು ಹಡೆಯೆ
ನಂಜನುಣ್ಬ ಶಿವನೆ ರಕ್ಷೆ :
  ಶರಣೆನುತ್ತೆ ಕಾಲ್ವಿಡಿ !
ಅಮರ್ದು ಅವನ ಕೃಪೆಯ ಭಿಕ್ಷೆ :
  ಶರಣು ಶರಣು ಶಿವನಡಿ !



## ರಸಪ್ರೇಮವ್ರುಳಿಯಲಿ !

ಸತೀಮೋಹ ಕ್ಲೇಶದಿಂದ
ಪರಿಹರಿಸೆನ್ನಾತ್ಮವ ;
ಮೋಹಮುಕ್ತ ಪ್ರೇಮದಿಂದ
ಸಿಂಗರಿಸೆನ್ನಾತ್ಮವ :
ಅಹಂಕಾರ ಖರ್ಪರ ಸಮ
ಮೋಹ ಸರ್ಪವಳಿಯಲಿ ;
ಧರ್ಮಬದ್ಧ ಕಾಮವರ್ತಿ
ರಸಪ್ರೇಮವ್ರುಳಿಯಲಿ !



# ಸೌಂದರ್ಯ ಸೂಕ್ತ

ಸುಂದರವಾಗಿರು : ಈ ಸೌಂದರ್ಯ,
ನಿನಗದೆ ಬಾಳಿನ ಸರ್ವೋತ್ತಮ ಕಾರ್ಯ!
ಸೌಂದರ್ಯವೆ ಶಿವಕರ್ತ್ತವ್ಯ ;
ಸೌಂದರ್ಯವೆ ಸರ್ವೋತ್ತಮ ಗಂತವ್ಯ!
ಸೌಂದರ್ಯವೆ ಸತ್,
ಸೌಂದರ್ಯವೆ ಚಿತ್,
ಸೌಂದರ್ಯವೆ ಆನಂದ :
ಆ ಸಾಧನೆಗಾಗಿಯೆ ಈ ಸೃಷ್ಟಿಯ ಬಂಧ,
ಆ ಸಿದ್ಧಿಗೆ ಮೀಸಲು ಮುಕ್ತಿಯ ನಿತ್ಯಾನಂದ!

ಸುಂದರವಾಗಿರು : ಈ ಸೌಂದರ್ಯ,
ಇಂದ್ರಿಯ ಸೌಂದರ್ಯ,
ಪ್ರಾಣದ ಸೌಂದರ್ಯ,
ಚಿತ್ತದ ಸೌಂದರ್ಯ,
ಆತ್ಮದ ಸೌಂದರ್ಯ,
ಈ ಸೌಂದರ್ಯವೆ ಜೀವನಪುರುಷಾರ್ಥದ ಶಿವಕರ್ತ್ತವ್ಯ ;
ಈ ಸೌಂದರ್ಯವೆ ಆ ಪುರುಷೋತ್ತಮ ಚಿರಗಂತವ್ಯ!

ಸುಂದರವಾಗಿರು :
ಸೌಂದರ್ಯದ ಸೇವೆಯೆ ನೀ ಮಾಡುವ ಮಹದುಪಕಾರ!
ಸುಂದರವಾಗಿರು :
ಸೌಂದರ್ಯದಿ ಸಿದ್ಧಿಪುದಾ ಭಗವತ್ ಸಾಕ್ಷಾತ್ಕಾರ!



# ಅನಂಗ ವಂದನಾ

ನನ್ನ
ಬದುಕಿಗಿವಳೆ ಸೂರ್ಯ, ಚಂದ್ರ;
ಬಾಳ್ವೆಗಿವಳೆ ರಸದ ಕೇಂದ್ರ;
ಜೊತೆಯೊಳಿರಲು ನಾನೆ ಇಂದ್ರ!
ಮೆಯ್
        ಸೋಂಕೆ ಪುಲಕಸಂದನ;
        ಸುಯ್ ಸುಗಂಧ ಚಂದನ;
ತೋಳ್
        ಸುತ್ತೆ ಮೋಕ್ಷ ಬಂಧನ;
ಮುತ್ತೆ
        ಪ್ರಾಣ ಅಗ್ನಿ ಇಂಧನ!
ಆನಂದದ ಆಲಿಂಗನ
ಶಿವಗಿರಿಜಾ ಮದನರತಿಗೆ
ಷೋಡಶಾಂಗ ಸಾಷ್ಟಾಂಗದ
        ಅನಂಗವಂದನಾ!



# ಮಂತ್ರಗಾರ್ತಿ

ನಿನ್ನ ಮಂತ್ರಕೆ ಎಲ್ಲಿ ಓ ಇರುವುದೆಲ್ಲೆ?
ಹೇಳೆನ್ನ ನಲ್ಲೆ!

ಎನಿತು ದುಗುಡವೆ ಇರಲಿ
ಎನಿತು ಬಳಲಿಕೆ ಇರಲಿ
ಒಂದೆ ಚಣದಲಿ ನೀನು
ಪರಿಹರಿಸ ಬಲ್ಲೆ,
ಓ ನನ್ನ ನಲ್ಲೆ!

ಎನಿತು ಉಲ್ಲಸವಿರಲಿ
ಎನಿತು ಸಿರಿಸೊಗ ಬರಲಿ
ಒಂದೆ ಚಣದಲಿ ಎಲ್ಲ
ಸಂಹರಿಸಬಲ್ಲೆ,
ಓ ನನ್ನ ನಲ್ಲೆ!

ನರಕದಲಿ ನಾಕವನೆ
ನೀ ಸೃಜಿಸಬಲ್ಲೆ;
ನಾಕವನು ನಿಂತಲ್ಲೆ
ನರಕವಾಗಿಸಬಲ್ಲೆ,
ಓ ನನ್ನ ನಲ್ಲೆ!

ನಿನ್ನ ಮಂತ್ರಕೆ ಎಲ್ಲಿ ಓ ಇರುವುದೆಲ್ಲೆ?
ಹೇಳೆನ್ನ ನಲ್ಲೆ!



# ಗೃಹದೇವತೆ

ಯಾವ ದೇವತೆಯೊಲಿದರೇನು
ಮನೆಯು ದೇವತೆ ಮುಳಿದರೆ?
ಯಾವ ದೇವತೆ ಹೊಗಳಲೇನು
ಮನೆಯು ದೇವತೆ ಹಳಿದರೆ?



# ಹೇಮ ರೂಪಸಿಗೆ

ಪ್ರೇಮ ಮಧುಪ್ರೇಯಸೀ
ಹೇ ಹೇಮಾ ರೂಪಸೀ
ನನ್ನ ಕೈಯೊಳಿರಲು ನಿನ್ನ
ಪ್ರೇಮ ಶಿಖರ ಪದುಮ ಸದೃಶ
ಹೇಮವಕ್ಷದಮೃತ ಕಲಶ,
ನಾನು ಅಜರ! ನಾನು ಅಮರ!
ನಾನು ದಿವ್ಯ! ನಾನು ಧನ್ಯ!
ನಾನು ಪೂರ್ಣ! ನಾನು ಶೂನ್ಯ!
ಪ್ರೇಮ ಮಧುಪ್ರೇಯಸೀ
ಹೇ ಹೇಮಾ ರೂಪಸೀ!



# ಮಹಾಲಿಂಗನ

ಮಹಾಲಿಂಗನಾ
ಮೋಕ್ಷವೊಂದಸಂಗನಾ ಮಹಾಲಿಂಗನಾ!
ಲೋಕವೊಂದು ನರಕ ಕೂಪ
ಜನನವೊಂದು ಘೋರ ಶಾಪ
ನೀನು ತೊರೆದರೆ,
ನಾನು ಮರೆತರೆ!—

ಮಹಾಲಿಂಗನಾ
ಮೋಕ್ಷವೊಂದಸಂಗನಾ ಮಹಾಲಿಂಗನಾ!
ನಿನ್ನ ಬಾಹುಬಂಧನ
ನನ್ನ ಮೋಕ್ಷನಂದನ;
ನೀನು ಒಲಿದರೆ,
ನಾನು ತಿಳಿದರೆ!—

ಮಹಾಲಿಂಗನಾ
ಮೋಕ್ಷವೊಂದಸಂಗನಾ ಮಹಾಲಿಂಗನಾ!



# ವಿರಹತೃಷ್ಣೆ

ಎತ್ತ ತಿರುಗಲಿ ಕಣ್ಣು, ನಿನ್ನ ಕಾಣುವಾಸೆ;
ಏನ ನೆನೆಯಲಿ ಚಿತ್ತ, ನಿನ್ನ ಚಿಂತಿಪಾಸೆ
ನುಡಿವ ನಾಲಗೆಗೊಂದೆ ನಿನ್ನ ಹೆಸರಿನಾಸೆ;
ಮಣಿವ ಹಣೆಗಿಹುದೊಂದೆ ನಿನ್ನ ಚರಣದಾಸೆ.
ಮುತ್ತಿಡುವ ತುಟಿಗೊಂದೆ ನಿನ್ನ ಕೆನ್ನೆಯಾಸೆ;
ಆಲಿಂಗಿಸುವ ತೋಳ್ಗೆ ನಿನ್ನ ವಕ್ಷದಾಸೆ.
ವೊಲ್ಲೆ ಮಲ್ಲಿಗೆ ರಾಶಿ: ಮೆಯ್ಯನಪ್ಪುವಾಸೆ;
ಜೀವದುಂಬಿಗೆ ಮೂಸಿ ತಣಿವನೊಪ್ಪದಾಸೆ.
ಉಸಿರು ಉಸಿರೊಳು ನಿನ್ನ ಸೊಳಗೆ ಕೊಳ್ಳುವಾಸೆ;
ಉಸಿರು ಉಸಿರೂ ನಿನ್ನೊಳೈಕ್ಯವಾಗುವಾಸೆ.
ಹೀರಿದನಿತೂ ಹೀರಿ, ಸೇರಿ ಹೋಗುವಾಸೆ;
ಸೇರಿದನಿತೂ ಸೇರಿ, ಬೇರೆಯಾಗದಾಸೆ!



# ಶ್ರೀಮತಿ . . . ಯಾದೆ!

ಹಕ್ಕಿರದುಸಿರಿಗೆ ಹಕ್ಕಾದೆ;
ದಿಕ್ಕಿರದುಸಿರಿಗೆ ದಿಕ್ಕಾದೆ.
ಮನೆಬಿಟ್ಟವನಿಗೆ ಮನೆಯಾದೆ;
ಕಣ್‌ಗೆಟ್ಟವನಿಗೆ ಕಣ್ಣಾದೆ;
    ಒಲುಮೆಯ ಹೆಣ್ಣಾದೆ!
ಸಾವಿನ ಸರಸಕೆ ಬಲಿವೋದರಸಗೆ
    ಅಮೃತದ ಹಣ್ಣಾದೆ!

ಜೋಳ್ ತುಂಬಿದೆ ನಾ
ಹಸುಳೆಯವೊಲೆ ನಿನ್ನನು ನಂಬಿ;
ಬಾಳ್ ತುಂಬಿದೆ ನೀ
ತಾಯಿಯವೊಲೆ ನನ್ನ ಸು-ಚುಂಬಿ!
    ಪ್ರೇಮದ ಸತಿಯಾದೆ;
    ಜೀವನ ರತಿಯಾದೆ.
    ಜೀವಗೆಳತಿಯಾದೆ,
    ಜೀವಕೆ ಗತಿಯಾದೆ!
ಶ್ರೀಮತಿ . . . ಯಾದೆ!



# ಅನಂತೆ ನೀಂ: ಮನಮನಕೆ ಮನದನ್ನೆ !

ಅನಂತೆ ನೀಂ: ಮನಮನಕೆ ಮನದನ್ನೆ !
ಮನೆಮನೆಗೆ ಕಣ್ಣಾಗಿ ಬರುವ ಕನ್ಯೆ,
ಕನ್ನೆಯೊಳೆ ಬೈಗುಬೆಳಗಾಗಿಸುವ ನೀನೆ ಧನ್ಯೆ !

ಎಲ್ಲ ಲೋಕಗಳೆಲ್ಲ ಸೌಂದರ್ಯವೀವೊಂದೆ
　　ಸುಂದರ ಶರೀರದಲಿ ನಯನರಮ್ಯ ;
ಎಲ್ಲ ಲೋಕಗಳೆಲ್ಲ ಸಂತೋಷವೀವೊಂದೆ
　　ವದನದ ಗವಾಕ್ಷದಲಿ ಹೃದಯಗಮ್ಯ ;
ಎಲ್ಲ ಲೋಕಗಳೆಲ್ಲ ಪ್ರೇಮರಸವೀವೊಂದೆ
　　ಚೆಂದುಟಿಯ ಹೊಂದಳಿಗೆಯಲಿ ಸಮಾಕೀರ್ಣ ;
ಎಲ್ಲ ತೃಷ್ಣೆಗಳೆಲ್ಲ ಸಂತೃಪ್ತಿಯಾವೊಂದೆ
　　ಹೊಂಗಳಸದಾಲಿಂಗನದಿ ಸುಧಾಪೂರ್ಣ !

ಅನಂತವೇ ಸಾಂತದಲಿ ನಿತ್ಯಮವತರಿಸಿ ನಿಂತು
ಸಿರಿಸೊದೆಯನೆರೆಯುತಿದೆ ಬಾಳ ನೀರಡಿಕೆಗಿಂತು :
ತನತನಗೆ ತಾನೆ ತಾನೊಲಿದ ಪೆಣ್ಣೊಡಲನಾಂತು
ಮನೆಮನೆಗೆ ಮಗಮಗಿಸಿ ನಗೆಯ ಕೈಸೊಡರು ಬಂತು !
ಹೇ ದೇವಿ, ನೀನನಂತೆ ;
ಕೃಪೆಯಿಂದೆ ಮನೆಮನೆಯೊಳಾದೆ ಸಾಂತೆ,
ಮತ್ತೆ ಮನಮನದೊಳಂತೆ ನಿಂತೆ ;—
ಓ ಅಮೃತ ಶಾಂತೆ,
ಸಚ್ಚಿದಾನಂದ ವಿಶ್ರಾಂತೆ,
ಎದೆಯೆದೆಗೆ ಇಳಿದು ಬಾ ಎದೆಯನ್ನೆಯಂತೆ !



# ಅರ್ಧಾಂಗಿಗೆ

ನೀನಿರೆ ಬೆಂಬಲ, ಹಗುರ ಹಿಮಾಚಲ;
ನೀ ಹೋದರೆ ದೂರ
ಅರಳೆಯೆ ಗಿರಿಭಾರ!
ನೀನೊಡನಿರೆ ನಾ ರಸಸಂಗಿ;
ದಿಟ ನೀನರ್ಧಾಂಗಿ!

ಇದನೆಂಬರೆ ತಿರೆ ನೀ ಕಣ್‌ಮುಂದಿರೆ?
ನೀನಿರೆ ಸಂಸಾರ
ತಾನಿಕ್ಷುಕ್ಷೀರ!
ನೀ ನೀರೆ,
ನಾ ನೀರ;
ಈ ಪಾರ,
ಆ ಪಾರ,
ತೋಳ್ ತಬ್ಬಿದ ನಾವಿಬ್ಬರೆ
ರಸಕೆರಡೇ ತೀರ!



# ಸಾಮಾನ್ಯವೆ ಈ ಸಂಗತಿ?

"ನಾನು ನಿಮ್ಮ ಶ್ರೀಮತಿ;
ನೀವು ನನ್ನ ಶ್ರೀಪತಿ!"

"ನನ್ನವಳೆ? ನನ್ನವಳೆ?
ನೀನು ನನ್ನವಳೆ?"

"ನಿಮ್ಮವಳೆ! ನಿಮ್ಮವಳೆ!
ನಾನು ನಿಮ್ಮವಳೆ!
ಇಂದಿಗೂ ಎಂದಿಗೂ
ನಾನು ನಿಮ್ಮವಳೆ!"

"ನನ್ನವಳು! ನನ್ನವಳು!
ನೀನು ನನ್ನ ಹೆಂಡತಿ!
ನಾವಿಬ್ಬರು ಎಂದೆಂದೂ
ಕೂಡಿ ಒಂದು ದಂಪತಿ!—
ನೀನು ನನ್ನ ಹೆಂಡತಿ!—
ಸಾಮಾನ್ಯವೆ ಈ ಸಂಗತಿ?
ನನ್ನವಳು! ನನ್ನವಳು!
ಆಃ! ನನ್ನ ಹೆಂಡತಿ!

ಏನದ್ಭುತ! ಏನಚ್ಚರಿ!
ಸಾಮಾನ್ಯವೆ ಸಂಗತಿ?
ಬ್ರಹ್ಮಾಂಡದ ಪತ್ರಿಕೆಗೂ
ಅತ್ಯದ್ಭುತ ಸಂಗತಿ!
ಸ್ವರ್ಣಾಕ್ಷರ ಸಂಗತಿ!"

"ಬಿತ್ತಿದವರು ಶಿವಪಾರ್ವತಿ;
ಬೆಳಸುತಿಹರು ಅಜ ಸರಸತಿ;
ಈ ಒಲವಿನ ಇನಿಜೇನನು
ಸವಿಯುತಿಹರ್ ಅನಂಗರತಿ!—
ನಾನು ನಿಮ್ಮ ಶ್ರೀಮತಿ!
ನೀವು ನನ್ನ ಶ್ರೀಪತಿ!"

## ಷೋಡಶಿಗೆ

ಷೋಡಶೀ, ಷೋಡಶೀ,
ಮೂಡಿ ಬಾ, ಷೋಡಶೀ!
ಬಾಳ ಕವಿಯೆ ಕಾಳ ನಿಶಿ
ಮೂಡುವೋಲು ಪೂರ್ಣಶಶಿ,
ಚಿನ್ಮಯೀ, ಹೃನ್ಮಯೀ,
ಮೂಡಿ ಬಾ, ಷೋಡಶೀ!

ಕತ್ತಲೇ ಅತ್ತಲೇ
ಓಡುವಂತೆ, ಷೋಡಶೀ,
ಚಂದ್ರಿಕಾ ಚಕೋರಿಯಾಗಿ
ಸೌಂದರ್ಯ ಸಾಂದ್ರೆಯಾಗಿ,
ಪ್ರೇಯಸೀ, ಪ್ರೇಯಸೀ,
ಮೂಡಿ ಬಾ, ಷೋಡಶೀ!

ಗಿರಿಗಿರಿಯಾ ಶಿರಶಿರದಾ
ಶಿಲಾತಲದಿ ಕ್ರೀಡಿಸಿ,
ಮರಮರದಲಿ ಮರ್ಮರಿಸಿ
ಅಲೆವ ಎಲರ ಒಲವರಸಿ,
ಷೋಡಶೀ, ಷೋಡಶೀ,
ಮೂಡಿ ಬಾ, ಷೋಡಶೀ!

ಷೋಡಶೀ, ಷೋಡಶೀ,
ಪ್ರಣಯನಾಕದುರ್ವಶೀ,
ಅನಿಂದಿತೇ, ಅಚುಂಬಿತೇ,
ಅನವರತಪ್ರಾಣರತೇ,
ಪ್ರೇಯಸೀ, ಪ್ರೇಯಸೀ,
ಮೂಡಿ ಬಾ, ಷೋಡಶೀ!

ಷೋಡಶೀ, ಷೋಡಶೀ,
   ರಸಋಷಿಯಾ ಪ್ರೇಯಸೀ,
ನಿತ್ಯ ನಿರ್ದಿಗಂತಿನೀ
ಸಾಂತದೊಳೂ ಅನಂತೆ ನೀ !
ಪ್ರೇಯಸೀ, ಷೋಡಶೀ,
   ಮೂಡಿ ಬಾ, ಷೋಡಶೀ !



# ನಿನ್ನ ಮೆಯ್

ದೇವನಿತ್ತ ಧರಾಸ್ವರ್ಗ
  ನನಗೆ ನಿನ್ನ ಮೆಯ್ !
" ಪಂಚಭೂತ, ಬರಿ ನಿಸರ್ಗ ! "
  ಎಂಬರೇನಯ್ ?
ವಿದ್ಯುದಣುಗಳೊಂದು ಸಂಧಿ
  ಎಂದ ಮಾತ್ರಕೆ
ಭಂಗ ಬಹುದೆ, ಹೇಳು, ಮಧುವ
  ಮಧುರಪಾತ್ರಕೆ ?

ಅಲರ ಕಂಪು, ಎಲರ ತಂಪು,
  ತಳಿರ ಸೊಂಪು ;
ಏಕಾಂತದ ವೀಣೆಯಂತೆ
  ಪ್ರಾಣದಿಂಪು :
ದೇವನಿತ್ತ ಧರಾಸ್ವರ್ಗ
  ನನಗೆ ನಿನ್ನ ಮೆಯ್ !
" ಪಂಚಭೂತ, ಬರಿ ನಿಸರ್ಗ ! "
  ಎಂಬರೇನಯ್ ?



# ಪ್ರಾಣೇಶ್ವರಿಗೆ

ಪ್ರಾಣೇಶ್ವರೀ, ಪ್ರಾಣೇಶ್ವರೀ,
ನೀನೊಡನಿರೆ ಗರಿಹಗುರಾ
ಸವಿಬದುಕೂ ಸಂಸಾರಾ ;
ನೀನಿರದಿರೆ ಗಿರಿಭಾರಾ
ಕಡುಬೇಸರ ಸಿಸ್ಸಾರಾ !

ಪ್ರಾಣೇಶ್ವರೀ, ಪ್ರಾಣೇಶ್ವರೀ,
ನೀನೊಡನಿರೆ ಸೂರ್ಯೋದಯ
ಸುಂದರ ಇಂದ್ರೃದಯಾ ;
ನೀನೊಡನಿರೆ ಚಂದ್ರೋದಯ
ಇಂದ್ರಾಣಿಯ ಪ್ರಣಯ !

ಪ್ರಾಣೇಶ್ವರೀ ಪ್ರಾಣೇಶ್ವರೀ,
ನೀನಿರದಿರೆ ಚಣಚಣವೂ
ನಾರಕ ಯುಗ ದೀರ್ಘ ;
ನೀನೊಡನಿರೆ ಯುಗಯುಗವೂ
ಕ್ಷಣದಿವ್ಯಂ ಸ್ವರ್ಗ !



## ಕುರುಡುತನವೆ ನೋಟ

ಇರುಳ ಮೊದಲ ತಾರೆ
ಬೈಗು ಹಣೆಗೆ ತೋರೆ
ಬನದಂಚಿಗೆ ಬಾರೆ,
  ಓ ನನ್ನ ನೀರೆ!

ಸುತ್ತ ಕವಿಯೆ ಕತ್ತಲೆ
ಚಿತ್ತಜನಿಗೆ ಬತ್ತಲೆ!
  ಕಣ್‌ಕಾಣದ ಬೇಟ
  ಕುರುಡುತನವೆ ನೋಟ!



# ಪ್ರಿಯೆಯ ಪತ್ರ

ನಾಡಿ ನಾಡಿಯಲಿ ಹರಿದುದು ಜೇನು
ನಾಳೆ ಬಹೆನೆಂದು ಬರೆಯಲು ನೀನು !

ಹತ್ತಿ ಕಲ್ಲವ್ೊಲಿದ್ದುದು ನಿನ್ನೆ ;
ಕಲ್ಲೆ ಹತ್ತಿಯಾಯ್ತಿಂದೆನ್ನ ಚೆನ್ನೆ !

ನಾಳೆ ನಿನ್ನ ನಾ ನೋಡಿದೊಡೆನ್ನ
ಮುಡಿ ನಿಮಿರದೆ ಹೇಳಂಬರದನ್ನ !



# ಸಕ್ಕರೆಯ ಕೆಸರಿನಲಿ

ಹೊರಳುತಿಹೆನೀ
        ಸಕ್ಕರೆಯ ಕೆಸರಿನಲ್ಲಿ ;
ಸಿಕ್ಕಿರುವೆನೀ
        ಜೇನುಸುಬಿನಲ್ಲಿ :
ನಿನ್ನ ಬೇವಿನ ಕಯ್ಯ
        ರಕ್ಷೆಯಂ ನೀಡಯ್ಯ ;
ನಿನ್ನ ನಖಕೃಪೆಯಿಂದ
        ಎತ್ತಿ ಪೊರೆಯಯ್ಯ !

ಅತ್ತ ಬೆಳಕಿದೆ ಬಲ್ಲೆನಾದರೂ
        ಕತ್ತಲೆಯ ಸವಿಯನುಳಿಯಲೊಲ್ಲೆ.
ಹೆಳವನೆಂತೇರುವನೊ ಆ ಮೇರುಗಿರಿಗೆ ?
        ತಿಳಿದು ಕೃಪೆದೋರಿಳಿದು ಬಾ ಈ ದೀನಧರೆಗೆ !

ಇರುವುದನು ಕಸಿದುಕೊಳ್ಳುವೆ ಎಂಬ ಭೀತಿ ;
        ನೀ ತರುವ ಆ ಬರುವುದರ ಮೇಲೆ ಪ್ರೀತಿ !
ನನ್ನ ಭಕ್ತಿಯೊ ? ಬಣಜಿಗನ ತಕ್ಕಡಿಯ ರೀತಿ !
        ಕೃಪೆದೋರಿ ಪೊರೆಯಲೆನ್ನನು ನಿನ್ನ ದಿವ್ಯನೀತಿ !



# ವ್ರತಭಿಕ್ಷೆ

ಇಂದು ಕೈಕೊಳ್ಳುವೆವು ನಿಮ್ಮ ಪದತಲದಲ್ಲಿ
ಬ್ರಹ್ಮಚರ್ಯವ್ರತವ, ಗುರುವೆ, ತಾಯಿ.
ಪಶುಮಾನವರು ನಾವು ; ನಿತ್ಯಮುಕ್ತರು ನೀವು ;
ನೋಂಪಿ ಗೆಲುವಂತೆಮ್ಮ ಹರಸಿ, ಕಾಯಿ.

ವಿಹರಿಸಿದೆವಿಂದ್ರಿಯಂಗಳ ಇಂದ್ರನಂದನದಿ
ಹತ್ತು ವರುಷಗಳಿಂತು ನಿಮ್ಮ ಕರುಣೆಯಲಿ ;
ಬಿಡಿಸಿ ನಮ್ಮನು ಮಧುರ ಮಾಯೆಯಿಾ ಪಾಶದಿಂ ;
ಮುಳುಗಲಾ ತೃಷ್ಣೆ ನಿಮ್ಮಡಿಯ ಮಡುವಿನಲಿ.

ನಮ್ಮಹಂಕಾರದಿಂ ನಾವಿದನು ಕೈಕೊಂಡು
ಕಡೆಹಾಯಿಸುವ ಹೆಮ್ಮೆ ನಮ್ಮದಿನಿತಲ್ಲ ;
ನಮ್ಮ ಭಕ್ತಿಗೆ ಒಲಿವ ನಿಮ್ಮ ಕೃಪೆ ತಾಂ ಶಕ್ತಿ ;
ಅದನುಳಿದರೆಮಗಾವ ಬೇರೆ ಬಲವಿಲ್ಲ.

ನಾವಿಲ್ಲಿ ಕತ್ತಲಲಿ ; ನೀವಲ್ಲಿ ಬೆಳಕಿನಲಿ ;
ಕನಿಕರಿಸಿ ಕಿರಣಚರಣವನಿತ್ತು ನೀಡಿ !
ಬಳ್ವಿಡಿಯುತಾ ಪಾದಪಂಕೇಜಮಂ, ತಾಯಿ,
ಪಂಕದಿಂ ಪಂಕಜಗಳೇಳುವೆವು ಮೂಡಿ,
ಪಾದವನಲಂಕರಿಪ ಪೂಜೆಯಂ ಮಾಡಿ !



# ವಿಜಯ ಸೇತು

ಯೋಗವನು ಕಾಲ್ವಿಡಿದು ಭೋಗಮಾರ್ಗದಿ ನಡೆದು
ತ್ಯಾಗವನು ಸಾಧಿಪುದು ನಮ್ಮ ದಾರಿ.
ಮೊದಲು ಕಾಲುವೆ ನೆಗೆದು, ಮೇಲೆ ಕಡಲನು ನೆಗೆವ
ಸಾಹಸವೆ ನೀತಿ, ಓ ನನ್ನ ನಾರಿ!

ಜನುಮ ಜನುಮಾಂತರದ ಸಂಸ್ಕಾರ ಸಂಗವನು
ತೆಕ್ಕನೆ ವಿಸರ್ಜಿಸುವುದೆಮ್ಮ ಅಳವೆ?
ತನ್ನ ಸಮಯಕೆ ಮೂಡುವಲರ ನೀ ಮುನ್ನ ಮೆಯೆ
ಗಿಡದ ಗಬ್ಬದಿನೆಂತು ಹೊರಗೆ ಎಳೆವೆ?

ಸಾಧನೆಯ ಕಣದಿ ಗೆಲ್ಲುವೆವು ಗುರುಕೃಪೆಯಿಂದ
ಹಜ್ಜೆ ಹಜ್ಜೆಗೆ ಹೋರಿ ಕೆಡೆದು ಸೋತು.
ಸೋಲಿನ ಕಮಾನುಗಳೆ ಸಾಲ್ಗಟ್ಟಿ ನಿಲೆ, ಹುಟ್ಟಿ
ಬಟ್ಟೆವರಿವುದು ನಮ್ಮ ವಿಜಯ ಸೇತು!



# ಸತಿಗೆ ಸುಖಾಗಮನ

ತವರಿನಿಂದ ತಿರುಗಿ ಬಂದೆ:
ಹೋದ ಹರಣಗಳನೆ ತಂದೆ,
ಓ ಜೀವಿತೇಶ್ವರಿ!
ನೀನಿಲ್ಲದೆ ಬದುಕು ಗುಂಡು
ಕಲ್‌ಭಾರ!
ನೀನಿಲ್ಲದೆ ಟೊಳ್ಳು, ಬೆಂಡು,
ನಿಸ್ಸಾರ!
ಸುಖಾಗಮನಕಿದುವೆ ಕವನ
ನಿನಗೆ, ನನ್ನ ದೇವಿ!
ನನ್ನದೇನೆ ಇರಲಿ ತಪ್ಪು
ಕ್ಷಮಿಸಿ ಕರುಣಿಸೆನ್ನ ನಪ್ಪು,
ಬಾಳಿಸೆನ್ನ ನೋವಿ!



# ಸೌಭಾಗ್ಯವತಿಗೆ

ನೀನಿದ್ದರೆ ಮನೆ ತುಂಬು ;
   ಇರದಿರೆ ಬರಿ ಪಾಳ್‌ತೆರವು !
ನೀ ಬಂದರೆ ಮನ ತುಂಬು ;
   ಬರದಿರೆ ಬಾಳ್ ಬರಿತೆರವು !

ನೀನಿರೆ ಮನೆ ಕಿಕ್ಕಿರಿ ಕಿಷ್ಕಿಂಧೆ ;
   ಇರದಿರೆ ಬರು ವಂಧ್ಯೆ !
ನೀನಿರೆ ನಾಸರ್ಣವ ಸಂಪೂರ್ಣ ;
   ಇರದಿರೆ ಮರುಶೀರ್ಣ !
ನನ್ನಹಮನಿತೂ, ಅನಿಂದ್ಯಾ ವಂದ್ಯೆ,
   ನಿನ್ನಡಿಯಲಿ ಚೂರ್ಣ !



# ಬಂಧುಲೂನ

ನೀನಂದು ತಂದೆತಾಯಿಂದಿರನು ಬೀಳ್ಕೊಂಡು
  ಕಾಡಿಗೆಯ್ದಿದ ಧೃತಿಯೊಳೊಂದಿನಿತನೆನಗೆ
ಕರುಣಿಸಾಶೀರ್ವದಿಸು, ಓ ತಂದೆ ದಾಶರಥಿ:
  ಏಕಾಂಗಿ ನಾನಿಂದು ದುಃಖದೀನ!

ದಶಶಿರನ ಕೈತವಕೆ ನೀನು ಸೆರೆಯಾದಂದು
  ತೋರ್ದ ಶ್ರದ್ಧಾ ಧೃತಿಯೊಳೊಂದಿನಿತನೆನಗೆ
ಕರುಣಿಸಾಶೀರ್ವದಿಸು, ಓ ತಾಯಿ ಮೈಥಿಲಿಯೆ:
  ಏಕಾಂಗಿ ನಾನಿಂದು ಶೋಕಲೀನ!

ಕಪಿಬಲಕೆ ಕಳೆದುಸಿರು ಮರಳ್ವಂತೆ, ನೀನಂದು
  ಕಡಲ ನೆಗೆದಾ ಧೃತಿಯೊಳೊಂದಿನಿತನೆನಗೆ
ಕರುಣಿಸಾಶೀರ್ವದಿಸು, ಓ ವೀರಮಾರುತಿಯೆ:
  ಏಕಾಂಗಿ ನಾನಿಂದು ಹೃದಯಹೀನ!

ನವವಧೂ ಊರ್ಮಿಳೆಯಿನಗಲಿ ಸೇವಾತಪದಿ
  ನಿಂದ ನಿನ್ನಾ ಧೃತಿಯೊಳೊಂದಿನಿತನೆನಗೆ
ಕರುಣಿಸಾಶೀರ್ವದಿಸು, ಓ ಧೀರ ಸೌಮಿತ್ರಿ:
  ಏಕಾಂಗಿ ನಾನಿಂದು ಬಂಧುಲೂನ!



## ಬೇಗ ಬರಲಿ ಇಷ್ಟಮಿಲನ

ಮುಳುಗಿದನು ಮೂಡಿದಿನ;
ಕಳೆದುದೆಂತೊ ದೀರ್ಘದಿನ;
ಮೂಡಿಹನು ಸುಧಾಕರ;
ಮನವೊ ಶೂನ್ಯ ಭೀಕರ!
ವಿಯೋಗ ದುಃಖವಿದನು ನಾ
ಸಹಿಸೆ, ಶಂಕರ!
ಬೇಗ ಬರಲಿ ಇಷ್ಟಮಿಲನ,
ಓ ಕೃಪಾಕರ!



# ಪ್ರಿಯೆಯಲ್ಲಿ ಭಿಕ್ಷೆ

ಇನ್ನೇನಾದರೂ ನೀ ಮಾಡು,
ಅಗಲುವುದೊಂದುಳಿದು ;
ಮನ್ನಿಸಿ ಕರುಣಿಸಿ ಕಾಪಾಡು,
ಕವಿಹೃದಯುವ ತಿಳಿದು.

ನಟನೆಗೆ ನಿಜವನು ಮರೆಮಾಡಿ
ಒಲಿದಿಹೆ ಸತಿಲೀಲೆಯನಾಡಿ ;
ದಿಟದಿಂ ಮಾತಾಯಿ !
ಪದತಲದೀ ಪದವಿಯ ನೋಡಿ
ಹೃದಯದ ಮುನಿಸನು ಹೋಗಾಡಿ
ಕನಿಕರದಲಿ ಕಾಯಿ !

ಚಿತೆಯಾಗಿದೆ ಬಾಳ್ ; ಮನೆಯೆ ಶ್ಮಶಾನ !
ಹದಿನೈದೇ ದಿನಗಳ್ ಶತಮಾನ !
ಅಡಿಹುಡಿಯಾಗಿದೆ ಗೌರವ, ಮಾನ !
ದುಮ್ಮಾನದಿ, ಸತಿ, ನಾನತಿದೀನ !



# ಬರುತಾಳೆ ನಾಳೆ!

ಬರುತಾಳೆ ಬರುತಾಳೆ ಬರುತಾಳೆ ನಾಳೆ;
ಕೈಹಿಡಿದ ಮನದನ್ನೆ ಚೆನ್ನೆ ಬರುತಾಳೆ!

ಹೋದುಸಿರು ಹಿಮ್ಮರಳಿ ಬರುವಂತೆ ಬರುತಾಳೆ
ಒಣಗಲಿಹ ಪಯಿರಿಗೆ ಮಳೆಯಂತೆ ಬರುತಾಳೆ
ಬೆಂದೆದೆಗೆ ಶಾಂತಿಯ ಜೊನ್ನವ ತರುತಾಳೆ
ಒಡಲ ಕಡಲಿಗೆ ತಿಂಗಳುದಿಪಂತೆ ಬರುತಾಳೆ!

ತೋಟದ ಹೂಗಳಿಗೆ ಬರುವಂತೆ ಕಾಂತಿ
ಮನೆಯ ಶೂನ್ಯಕೆ ತುಂಬಿ ಬರುವಂತೆ ಶಾಂತಿ
ಕವಿಯ ಬಾಳಿರುಳಿಗೆ ಹೊಂಬೆಳಕು ಬರುವಂತೆ
ಶಿವನ ಮೊಗ್ಗೆಯೆ ಮಲರುವಂತೆ ಬರುವಳು ಕಾಂತೆ!



# ಇಷ್ಟಸಮಾಗಮದೊಲು ಬಾರ!

ಶ್ರೀಗುರುವೇ, ಪ್ರಿಯಗುರುವೇ, ದಯೆತೋರ!
ಇಷ್ಟ ಸಮಾಗಮದೊಲು ಬಾರ!
ಇಂದಾದರು ಬರಲಿ,
ಇಂದಾದರು ಬರಲಿ
ಶಿವಮೊಗ್ಗೆಯು ಬಾಲೆ
ಬರೆವೋಲೆ!
ಇಂದಾದರು ಬರಲಿ,
ಇಂದಾದರು ಬರಲಿ
ಅವರೆಲ್ಲರು ನಾಳೆ
ಬಹ ಓಲೆ!
ಶ್ರೀಗುರುವೇ, ಪ್ರಿಯಗುರುವೇ, ದಯೆತೋರ!
ಇಷ್ಟ ಸಮಾಗಮದೊಲು ಬಾರ!



# ಆಶೀರ್ವಾಣಿ

ಏಕಿಂತು ಕುದಿಯುತಿಹೆ, ಓ ನನ್ನ ಪ್ರಾಣಪುರುಷ?
ಲೋಕಮಾತೆಯ ವಕ್ಷದಲಿ ಸುರಕ್ಷಿತ ನಿನ್ನ ಹರುಷ!

ಇಂದುಕಲೆ ಮಿಂದುಟ್ಟು ಚಂದದಿಂದಿಹಳಲ್ಲಿ
ಶಿವಸುಖದ ಬುಗ್ಗೆಯೊಲು ಶಿವಮೊಗ್ಗೆಯಲ್ಲಿ!
ಚೈತ್ರನಾನಂದದಿಂ ತೇಜಸ್ವಿಯೊಡಗೂಡಿ
ಕೇಕೆ ಹಾಕುತ್ತಿಹನು ನವಿಲುಯ್ಯಲಾಡಿ!
ಹೆಸರನಿನ್ನೂ ಹೊರದ ಹೊಸದಾಗಿ ಬಂದವಳು
ನಾಳೆ 'ತಾರಿಣಿ'ಯಹಳು ಸುಖದೊಳಿಹಳು!
ಇಂದುಕಲೆ ಚೈತ್ರ ತೇಜಸ್ವಿ ತಾರಿಣಿಯರಿಗೆ
ಜನ್ಮವಿತ್ತಾ ನನ್ನ ಹೇಮಾಂಗಿ ತಾನವಳು
ಗುರುದೇವ ಕೃಪೆಯೊಳಾರೋಗ್ಯದಿಂದಿಹಳು!



# ನಿನಗಿರ್ಪುದಯ್ ಶಾಂತಿ ನಿನ್ನಾಕೆಯೋಲ್ !

ಏಕೀ ಅಶಾಂತಿ ? ಹಾತೊರೆಯುತಿಹುದೀ ಪ್ರಾಣಿ
ಸತಿಯು ಸಂಗಕೆ ಕಾತರಿಸಿ ! ಪುಸಿಯೆ ಪೇಳ್ ಶಾಂತಿ ?
ಬರಿಯ ಇಂದ್ರಿಯ ತೃಪ್ತಿಜನ್ಯ ನರವಿಶ್ರಾಂತಿ ?—
ಕರುಣಿಸಯ್, ಓ ಗುರುವೆ : ನಿಮ್ಮ ಪಾದದ ದೋಣಿ
ತೃಷ್ಣೆಯಗ್ನಿಯ ಘೋರಶರಧಿಯಿಾ ತೀರಕ್ಕೆ
ತೇಲಿ ಬರಲೀ ನನ್ನ ದಡಕೆ. ಪಶುಸಂಭ್ರಾಂತಿ
ಶಾಂತಿಯೆಂಬಾ ಭ್ರಾಂತಿಯಂ ತವಿಸಿ, ನಿಜಶಾಂತಿ
ಹೃದಯ ಸುಸ್ಥಿತಮಪ್ಪವೋಲ್ ನಿಮ್ಮ ದಯೆಯಕ್ಕೆ !

“ ಪೆಂಡಿತಿ ತವರ್ಮನೆಗೆ ಪೋಗೆ, ಕಾಣಿರೊ ಕಾಣಿ,
ನಿಮ್ಮ ರಸಋಷಿ, ಮಹಾಕವಿ ಮೇಣ್ ಕಲಾಯೋಗಿ
ಕೆಸರೊಳೊದ್ದಾಡುತಿದೆ ನೀರು ತಪ್ಪಿದ ಮಿಾನಿನೋಲ್ !
ಮರ್ಯಾದೆಗೇಡಿ ಕಾಣ್ ಗಾಂಭೀರ್ಯವೂ ನಿರ್ವಾಣಿ !
ಸಾಲ್ಗುಮಿಾ ಹಮ್ಮುಬಿಂಕಂ. ಏಳು, ತವರಿಗೆ ಹೋಗಿ
ಕರೆದು ತಾ : ನಿನಗಿರ್ಪುದಯ್ ಶಾಂತಿ ನಿನ್ನಾಕೆಯೋಲ್ !”



# ಇಂದುಕಲಾ

ಆವ ಮುಖದದಾವ ಸುಖದದಾವ ದುಃಖಕೆ
ಇಂದುಕಲಾ ಬಂದಿಹೆ ನೀನಿಂದು ಪೃಥಿವಿಗೆ?
ಹಗೆತನದಾ ನೆತ್ತರಿಂದ ನಾಂದ ಪೃಥಿವಿಗೆ?
ಸ್ವಾಮ್ಯ ದಾಸ್ಯದಿರ್ಕುಳದಲಿ ನೊಂದ ಪೃಥಿವಿಗೆ?

ಆಷಾಢದ ನಿಶೆ ಮೋಡದ ಮುಡಿಯ ಕಟ್ಟಿರೆ
ಕರಿಯು ತಿಂಗಳಾಯು ಚೌತಿಗಡಿಯ ಮುಟ್ಟಿರೆ
ಹಗಲು ಸದ್ದನಿರುಳು ಗೆದ್ದು ಗುಡಿಯ ನಟ್ಟಿರೆ
ಕೇಳಿ ಬಂದುದಿಂಪಿನ ಕರೆ: ನೀನು ಹುಟ್ಟಿರೆ!

ಏನದ್ಭುತಮೇನಚ್ಚರಿ ಜನ್ಮಧಾರಣೆ!
ಸಾವನುಳಿದು ಆ ಪವಾಡಕೆಣೆಗಳಿಹವೆ ಹೇಳ್?
ಅತಿಪರಿಚಯದಿಂದವಜ್ಞೆಯೆಂಬುದಿರದಿರೆ
ಅಚ್ಚರಿಗಳ ನಡುವೆ ಹರಿವ ಬದುಕು ಅಚ್ಚರಿ!



# ಕ್ಷಮಿಸು, ಕಂದ !

ಮುತ್ತನೊಂದನೊತ್ತದಿಂದು
    ಸತ್ತಿಸೊಂದು ದಿನವನು !

ಮನ್ನಿಸೆನ್ನ, ಮುದ್ದು ಕಂದ,
ನಮ್ಮ ನಮ್ಮ ಮುನಿಸಿನಿಂದ
ನಿನ್ನನೆತ್ತಿಕೊಳ್ಳದಿಂದು
    ಕೊಂದೆಸೊಂದು ದಿನವನು,
ಮತ್ತೆ ಮರಳಲಾರದೊಂದು
    ಮುತ್ತಿಸಂಥ ದಿನವನು !



# ಹೆಣ್ಣು—ಗಂಡು

"ಹೆಣ್ಣು ಕೊರಳಿಗೆ ಬಿಗಿವ
ಕಲ್ಲು ಗುಂಡು!"
ಎನಬೇಡ; ಕೇಳೆನ್ನ,
ಮದುವೆಗಂಡು:

ಸಂಸಾರ ಸಾಗರದಿ
ಹೆಣ್ಣು ಗಂಡು
ಕುತ್ತಿಗೆಗೆ ಗುಂಡಲ್ಲ,
ಬೆನ್ಗೆ ಬೆಂಡು!

ಈಜಿ ಕೈಸೋತಂದು
ರೇಜಿಗೆಯು ಹಿಡಿದಂದು
ಮುಳುಗಲೀಯದೆ ನಿಂದು
ಹೊರೆವುದಯ್ಯ!

ಬಾಳು ಹುಣ್ಣಾದಂದು
ಬಳಲಿ ಬೆಂಡಾದಂದು
ಹೆಣ್ಣೆ ಹರಣವ ತಂದು
ಹೊರೆವಳಯ್ಯ!



# ಪ್ರೇಮ ಮಂತ್ರ

ಚೆಲುವೆಲ್ಲಿದ್ದರೆ ಗೆಲುವಲ್ಲಿ ;
ಒಲವೆಲ್ಲಿದ್ದರೆ ಬಲವಲ್ಲಿ.
ಚೆಲುವಿದೆ ನಿನ್ನಲ್ಲಿ,
ಒಲವಿದೆ ನನ್ನಲ್ಲಿ,
ನಮ್ಮಿಬ್ಬರ ಬಾಳ್ಗಿದಿರೆಲ್ಲಿ ?



# ಏಳು, ರಮಣಿ !

ಏಳು, ರಮಣಿ, ಏಳು ! ಅದೋ
ಪೂರ್ವದಿಶಾದೇವಿಯಾರ್ಯ
ಮೂಡುತಿಹನು ಉದಯಸೂರ್ಯ ;
  ಕೈಮುಗಿದು ಮಣಿ !
ಜಗತ್‌ಪ್ರಾಣ ಶಕ್ತಿ ಸಿಂಧು,
ಜಗಜ್ಜೀವ ಹೃದಯ ಬಂಧು,
  ದೇವ ದಿನಮಣಿ !

ಓಪನೊಡನೆ ಸರಸಗೆಯ್ಯೆ
  ಹೆರಳು ಬಿಚ್ಚಿ ಮುಡಿಯಿನುದುರಿ
  ಚುಕ್ಕಿಯರಳು ಬೀಳೆ ಕೆದರಿ
ಕಿಕ್ಕಿರಿದುದೊ ನೀಲಶಯ್ಯೆ !
ತಿಂಗಳಿನಿಯನದನು ನೋಡಿ
  ತೆಳು ಬೆಳ್‌ಮುಗಿಲುಡೆಯನಿಳ್ದು
  ಚೆಲ್ವುಮೆಯ್ಯ ಸೊಗದೊಳಳ್ದು
ನಗೆಬೆಳಗಿದನಣಕವಾಡಿ !

ಗಗನಗೃಹದೊಳಿರುಳೆಲ್ಲಂ
  ಶಶಿ ನಿಶೆಯರ್ ದಂಪತಿಗಳ್
  ಮೆಯ್ ಮರೆತಿರೆ ರಸಸುಖದೊಳ್
ಪಗಲಿಣುಕಿತ್ತದೊ ಮೆಲ್ಲಂ !

ನೆಲಬಾನ್ಗಳ್ ಕೂಡುವಲ್ಲಿ
ಎಳನೇಸರ್ ಮೂಡುವಲ್ಲಿ
ಮಲೆನೆತ್ತಿಯ ಕೋಡಿನಲ್ಲಿ
  ತೋರಿದಳದೊ ಬಂದಳು !
ಆರ್ ಅನಿಮಿಷೆ? ಸುಂದರಿ ಉಷೆ !
  ಏರಿದಳದೊ ನಿಂದಳು !

ಹಳದಿಗೆಂಪೆ ಬಣ್ಣಸೀರೆ:
   ಒಸಗೆಯೋಕುಳಿ!
ಉದಯರವಿಗೆ ರಾಗವೇರೆ
   ಭೋಗಮುಖದಲಿ
ಮೆಯ್ಯಲಿ ರತಿ, ಕೈಲಾರತಿ,
ಮೂಲೋಕದ ಅವಲೋಕದ
ಗುರಿಯೆನಲ್ಕೆ ಸಿರಿಯೆನಲ್ಕೆ
ಬಂದನಿಮಿಷೆ ನಿಂದಳೊ ಉಷೆ
   ಓ ದಿಗಂತದಿ!—
ಎನುತೆ ಬಾನಿನುಪ್ಪರಿಗೆಯು
   ಮೇಲುಹಂತದಿ
ಚಂದ್ರನ ಸತಿ ನಿಶಾಯುವತಿ
   'ಏಳಿ! ಬಿಡಿ!' ಎಂದು ನಾಚಿ,
   ತಲೆಯ ಕತ್ತಲೆಯನು ಬಾಚಿ;
ಬಿಚ್ಚುದುಡೆಯ ಸೋರುಮುಡಿಯ
ಕೆದರಿದರಿಲ್ಗಳಲರ್ವುಡಿಯ
ಸುತ್ತಿ, ಕಟ್ಟಿ, ಕೂಡೆವೊಟ್ಟಿ,
   ಓಡಿವೋದಳು!
ಅಯ್ಯೊ, ಶಶಿಯ ಮುಖ ಮರೀಚಿ
   ಬತ್ತಿ ಬಾಡಿ ಬೆಳ್ಳಗೇರೆ
   ಕರುಣೆಯಿಲ್ಲದಿರುಳ ನೀರೆ
ಹಗಲಾಣ್ಮಗೆ ಹೆದರಿ ನಾಚಿ
   ಮಾಯವಾದಳು!

ಕಂಪುವೆತ್ತು ತಂಪುಗಾಳಿ
   ಪುಷ್ಪಧೂಳಿಗಳನು ಸೂಸಿ
   ವೃಕ್ಷಗಳನೆ ಚವರಿವೀಸಿ
ನವೋದಯವ ಸಾರಿ ಹೇಳಿ
   ಸುಯ್ಯುತಿರುವುದೊಯ್ಯನೆ;

ಉಷಾಮೌನ ವೀಣೆತಂತಿ
    ಸ್ವರತರಂಗ ತತಿಯನೆಸೆಯೆ,
    ಸೊಬಗಿಗಿಂಪು ಸಾಣೆಮಸೆಯೆ,
ವೃಕ್ಷಗಳಲಿ ಪಕ್ಷಿಪಂಕ್ತಿ
    ಉಲಿಯುತಿಹುದು ರಯ್ಯನೆ!

ನಿದ್ದೆ ಸಾಕು, ಏಳು, ರಮಣಿ:
ಮೂಡಿ ಬಂದನದೋ ಖಮಣಿ!
    ಕೈಮುಗಿದು ಮಣಿ!
ನಮ್ಮ ಬಾಳ್ಗೆ ಬೆಳಕೆ ಕಣ್ಣು;
ಪ್ರಾಣಕಮೃತ ರಸದ ಹಣ್ಣು
    ದೇವ ದಿನಮಣಿ!



# ಪ್ರಣಯ ಸಿದ್ಧಾಂತ

ಕರ್ಮವಂತೆ ಧರ್ಮವಂತೆ
ಕೆಲಸವಂತೆ ಕೀರ್ತಿಯಂತೆ
ದೇಶವಂತೆ ಭಕ್ತಿಯಂತೆ
ಆತ್ಮವಂತೆ ಮುಕ್ತಿಯಂತೆ:
  ಎಲ್ಲ ಕೂಡಲೊಂದು ಸೊನ್ನೆ
  ನೀನಿಲ್ಲದೆ, ನನ್ನ ಚೆನ್ನೆ!



# ಆಶೆ

ಬ್ರಹ್ಮಕೆ ಸೃಷ್ಟಿಯ ಮಹದಾಶೆ ;
ಸೃಷ್ಟಿಗೆ ಬ್ರಹ್ಮದ ಬೃಹದಾಶೆ !

ಆಶೆ ಆಶೆ ಆಶೆ ಆಶೆ
ಸೃಷ್ಟಿಯೆ ಬ್ರಹ್ಮದ ಹೇರಾಸೆ:
ತಾಯಿಗೆ ಮಗುವಿನ ಆಶೆ,
ಮಗುವಿಗೆ ತಾಯಿಯ ಆಶೆ.
ಹೂವಿಗೆ ಚಿಟ್ಟೆಯ ಆಶೆ,
ಚಿಟ್ಟೆಗೆ ಹೂವಿನ ಆಶೆ.
ಗಂಡಿನ ಕಿವಿಗೆ
ಹೆಣ್ಣಿನ ದನಿಯಾಶೆ ;
ಹೆಣ್ಣಿನ ಕಿವಿಗೆ
ಗಂಡಿನ ದನಿಯಾಶೆ.
ನನಗೆ
ನಿನ್ನಾಶೆ ;
ನಿನಗೆ
ನನ್ನಾಶೆ !

ಆಶೆ ಆಶೆ ಆಶೆ ಆಶೆ
ಸೃಷ್ಟಿಯೆ ಬ್ರಹ್ಮನ ಹೇರಾಸೆ :

ಬ್ರಹ್ಮಕೆ ಸೃಷ್ಟಿಯ ಮಹದಾಶೆ,
ಸೃಷ್ಟಿಗೆ ಬ್ರಹ್ಮದ ಬೃಹದಾಶೆ !



# ನನ್ನ ನಮರಗ್ಯೆದಿಹೆ!

ನಮಸ್ಕರಿಸಿ ನಮಸ್ಕರಿಸಿ
ನನ್ನ ನಮರಗ್ಯೆದಿಹೆ:

ರವಿಚುಂಬನ ಲಜ್ಜೆಯಿಂದೆ
ಕೆಂಪೇರ್ದುಷೆ ಮೂಡುವಂದೆ,
ಕವಿಚುಂಬನ ಲಜ್ಜೆಯಿಂದೆ
ಸಜ್ಜೆಮುಂಚವಿಳಿವ ಮುಂದೆ
ನನ್ನ ಪಾದಗಳಿಗೆ, ಚಿನ್ನ,
ನಮಿಸಿ ನಮಿಸಿ ನೀನು ನನ್ನ
ದೇವಗ್ಯೆದಿಹೆ!

ಒಡಲ ಉಸಿರ ಸರ್ವಾಂಗಕೆ
ಜೀವತ್ವದ ಸರ್ವಸ್ವಕೆ
ದೇವತ್ವವನಾಹ್ವಾನಿಸಿ
ದಿವ್ಯನದಿಯ ವಾರಿಯಲ್ಲಿ
ಅನುದಿನವೂ ದಿನದಿನವೂ
ಮಿಾಹಗ್ಯೆದಿಹೆ!

ನನ್ನ ದನುಜತನದ ಕೊಲೆಗೆ
ನಮನವೊಂದು ಕೈದುವಾಗೆ,
ದೇವರಡಿಗಳಿಳಿವ ಕಲೆಗೆ
ಮುಡಿಯು ಮಣಿಹ ಸೇತುವಾಗೆ,
ಒಂದೊಂದೆಯೆ ನಮನದಿಂದೆ
ನನ್ನಲ್ಪವನೆಲ್ಲ ಕೊಂದೆ;
ಧಮನಿಧಮನಿಯಲ್ಲಿ ಹರಿವ
ನೆತ್ತರೆಲ್ಲ ಅಮೃತವಾಗೆ
ಮನುಜತನವನಳಿಸಿಹೆ;
ದಿವಿಜತನವನಿಳಿಸಿಹೆ;
ನನ್ನ ನಳಿಸಿ ಉಳಿಸಿಹೆ!

ಸತಿಗೆ ಪತಿಯೆ ದೇವರೆಂಬ
ನುಡಿಗೆ ಗುಡಿಯ ಕಟ್ಟಿಹೆ!
ಮಣಿದೆ ಮಣಿದೆ ಮರ್ತ್ಯನನೂ
ಅಮರ ಪದವಿಗಟ್ಟಿಹೆ!



# ಚಕೋರಾಭೀಪ್ಸೆ

ಓ ಬೆಳಕಿನಾ ಮಲ್ಲಿಗೆ,
ಇಳಿದು ಬಾ ಇಲ್ಲಿಗೆ:
ಏರಲಾರೆನಲ್ಲಿಗೆ
ಓ ನನ್ನ ಮಲ್ಲಿಗೆ!

ಓ ಅಗ್ನಿ ಚರಣ ಚಂದ್ರಿಕೆ,
ನನ್ನ ಅಸು ಚಕೋರಿಕೆ
ತೃಷಿತೆ; ಆದೊಡಂಜಿಕೆ:
ನೀನಗ್ನಿ ಚಂದ್ರಿಕೆ!

ಓ, ಈ ಚಕೋರ ಕೋರಿಕೆ,
ನನ್ನ ಹೇ ಚಕೋರಿಕೆ,
ಏರಲಾರದಲ್ಲಿಗೆ:
ಇಳಿದು ಬಾ ಇಲ್ಲಿಗೆ,
ಓ ಬೆಂಕೆಮಲ್ಲಿಗೆ!



# ಮೊದಲ ಚರಣಗಳು

# ಕುವೆಂಪು ಅವರ ಕೃತಿಗಳು

| | | ರೂ. ಆ. ಪೈ |
|---|---|---|
| ೧. | ಶ್ರೀ ರಾಮಾಯಣದರ್ಶನಂ (ಮಹಾಕಾವ್ಯ) ಸಂಪುಟ ೧ | ೧೨—೦—೦ |
| ೨. | ,, ,, ,, ೨ | ೧೩—೦—೦ |
| ೩. | ವಿಭೂತಿ ಪೂಜೆ (ದರ್ಶನಾತ್ಮಕ ಪ್ರಬಂಧಗಳು) | ೩—೪—೦ |
| ೪. | ರಕ್ತಾಕ್ಷಿ (ನಾಟಕ) | ೨—೮—೦ |
| ೫. | ಬೆರಲ್ ಗೆ ಕೊರಲ್ (ನಾಟಕ) | ೧—೮—೦ |
| ೬. | ಕಾವ್ಯವಿಹಾರ (ವಿಮರ್ಶೆ) | ೨—೪—೦ |
| ೭. | ಸನ್ಯಾಸಿ ಮತ್ತು ಇತರ ಕಥೆಗಳು | ೧—೮—೦ |
| ೮. | ಪ್ರೇಮಕಾಶ್ಮೀರ (ಪ್ರೇಮಗೀತೆಗಳು) | (ಅಚ್ಚಿನಲ್ಲಿ) |
| ೯. | ಕಾನೂರು ಹೆಗ್ಗಡಿತಿ | (ಅಚ್ಚಿನಲ್ಲಿ) |

ಈ ಪುಸ್ತಕಗಳು ಮಾರಾಟಕ್ಕೆ ಸಿದ್ಧವಾಗಿವೆ

ವಿಳಾಸ :—

'ಉದಯರವಿ'

ವಾಣೀವಿಲಾಸಪುರಂ ಅಂಚೆ

(ಮೈಸೂರು)